14.50ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 6.07,899/–ಗಳ ಮೇಲೆ ಶೇ. 13.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 6,86,926/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 42 ಏನೀಯೋ (ತಾಂತ್ರಿಕ) 2012, ಬೆಂಗಳೂರು, ದಿನಾಂಕ: 06ನೇ ಜೂನ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಜಿಲ್ಲೆ ಚಿಕ್ಕೋಡಿ ತಾಲ್ಲೂಕಿನ ನಾಯಿಂಗ್ಲಜ (ಯಾದ್ಯಾನವಾಡಿ) ನೇಜ, ನಾಯಿಂಗ್ಲಜ (ಸರ್ವೆ ನಂ.–492/4), ವಾಲ್ಕಿ ಹಾಗೂ ಪಟ್ಟಣಕೋಡಿ ಗ್ರಾಮಗಳ ಹತ್ತಿರ ಗಂಗಾಕಲ್ಯಾಣ ನೀರಾವರಿ ಯೋಜನೆ ಒದಗಿಸುವ ಕಾಮಗಾರಿ ಪ್ಯಾಕೇಜನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 6.07,899/– ಮೇಲೆ ಶೇ. 13.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 6,86,926/–ಗಳಿಗೆ (ರೂ. ಆರು ಲಕ್ಷ ಎಂಭತ್ತಾರು ಸಾವಿರದ ಒಂಭೈನೂರ ಇಪ್ಪತ್ತಾರು ಮಾತ್ರ)ಗಳಿಗೆ ಶ್ರೀ ಎಂ.ಎಂ. ಮುಂಡೆವಾಡಗಿ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ರುದ್ರಮೂರ್ತಿ
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1624

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ತಾಲ್ಲೂಕು, ಪಜೀರು ಗ್ರಾಮದ ಸೇನರಬೈಲು ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋನೆ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ:ಮುಸದ/ತಾಂಸ–5–ಸ.ಇಂ.11/ದ.ಕ.ಜಿ/ಬ.ತಾ/ಸೇನರಬೈಲು/ಇಪ್ರೊಕ್ಯೂರ್‌ಮೆಂಟ್/ಟೆಂಡರ್‌ಅನುಮೋದನೆ/2011/1681, ದಿನಾಂಕ:27–042012.

**ಪ್ರಸ್ತಾವನೆ :**

ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ತಾಲ್ಲೂಕು, ಪಜೀರು ಗ್ರಾಮದ ಸೇನರಬೈಲು ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ರೂ. 35.00 ಲಕ್ಷಗಳ ಅಂದಾಜು ಪಟ್ಟಿಗೆ ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಮೈಸೂರು ಇವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ 2ನೇ ಬಾರಿಗೆ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ದಕ್ಷಿಣ ಕನ್ನಡ ಜಿಲ್ಲಾ ಟೆಂಡರ್ ಬುಲೆಟಿನ್ | 09–01–2012 |
| ಹೊಸದಿಗಂತ ಮತ್ತು ಕರಾವಳಿ ಅಲೆ ದಿನ ಪತ್ರಿಕೆ | 15–01–2012 |

ದಿನಾಂಕ 30–01–2012 ರಂದು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರ್ ಅನ್ನು ತೆರೆಯಲಾಗಿದ್ದು, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರ ಟೆಂಡರ್ ಅರ್ಹತೆ ಹೊಂದಿದ್ದು, ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 33,41,669/– |
|---|---|---|---|
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಕೆ.ಎಂ. ಮೂಸ, ಒಂದನೇ ದರ್ಜೆ ಗುತ್ತಿಗೆದಾರರು | ರೂ. 39,43,212/– | 18.0013 ಹೆಚ್ಚು |

ಮೇಲ್ಕಂಡಂತೆ ಶ್ರೀ ಕೆ.ಎಂ. ಮೂಸ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 18.0013ರಷ್ಟು ಹೆಚ್ಚಾಗಿರುತ್ತದೆ. ಸದರ ಟೆಂಡರ್‌ನ್ನು ಸರ್ಕಾರದಲ್ಲಿ ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ. 13.50% ಹೆಚ್ಚಿನ ದರಗಳಿಗೆ ಅಂದರೆ ರೂ. 37,92,794/–ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 65 ಅಪಿಬಂ 2012 (ತಾಂತ್ರಿಕ), ಬೆಂಗಳೂರು, ದಿನಾಂಕ: 06ನೇ ಜೂನ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಬಂಟ್ವಾಳ ತಾಲ್ಲೂಕು, ಪಜೀರು ಗ್ರಾಮದ ಸೇನರಬೈಲು ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 33,41,669/–ಗಳ ಮೇಲೆ ಶೇ. 13.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 37,92,794/–ಗಳಿಗೆ (ರೂ. ಮೂವತ್ತೇಳು ಲಕ್ಷ ತೊಂಬತ್ತೆರಡು ಸಾವಿರದ ಏಳುನೂರ ತೊಂಬತ್ತ ನಾಲ್ಕು ಮಾತ್ರ)ಗಳಿಗೆ ಶ್ರೀ ಕೆ.ಎಂ. ಮೂಸ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ರುದ್ರಮೂರ್ತಿ

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1625 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ದಕ್ಷಿಣ ಕನ್ನಡ ಜಿಲ್ಲೆ, ಸೂಳ್ಯ ತಾಲ್ಲೂಕು, ಬೆಳ್ಳಾರೆ ಗ್ರಾಮದ ಮುಡಾಯಿತೋಟ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ:ಮುಸದ/ತಾಂಸ–5 ಸ.ಇಂ.11/ದ.ಜಿ/ಸು.ತಾ/ಮುಡಾಯಿತೋಟ/ಇಪ್ರೊಕ್ಯೂರ್‌ಮೆಂಟ್/ಟೆಂಡರ್‌ಅನುಮೋದನೆ/2011/1753, ದಿನಾಂಕ:07–05–2012.

**ಪ್ರಸ್ತಾವನೆ :**

ದಕ್ಷಿಣ ಕನ್ನಡ ಜಿಲ್ಲೆ, ಸೂಳ್ಯ ತಾಲ್ಲೂಕು, ಬೆಳ್ಳಾರೆ ಗ್ರಾಮದ ಮುಡಾಯಿತೋಟ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ರೂ. 40.00 ಲಕ್ಷಗಳ ಅಂದಾಜು ಪಟ್ಟಿಗೆ ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಮೈಸೂರು ಇವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ 3ನೇ ಬಾರಿಗೆ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ದಕ್ಷಿಣ ಕನ್ನಡ ಜಿಲ್ಲಾ ಟೆಂಡರ್ ಬುಲೆಟಿನ್ | 05–03–2012 |
| ಹೊಸದಿಗಂತ ಮತ್ತು ಕನ್ನಡ ಪ್ರಭ ದಿನ ಪತ್ರಿಕೆ | 10–03–2012 |

ದಿನಾಂಕ 24–03–2012 ರಂದು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರ್ ಅನ್ನು ತೆರೆಯಲಾಗಿದ್ದು, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಟೆಂಡರ್ ಅರ್ಹತೆ ಹೊಂದಿದ್ದು, ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 39,15,538/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 39,43,818/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಚೇರ್ಕಳ ಮಲ್ಲ ಅಸ್ಸೈನಾರ್, ಒಂದನೇ ದರ್ಜೆ ಗುತ್ತಿಗೆದಾರರು | ರೂ. 45,31,069/– | 15.72 ಹೆಚ್ಚು | 14.89 ಹೆಚ್ಚು |

ಮೇಲ್ಕಂಡಂತೆ ಶ್ರೀ ಚೇರ್ಕಳ ಮಲ್ಲ ಅಸ್ಸೈನಾರ್, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 14.89ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರ್‌ನ್ನು ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ. 14.00% ಹೆಚ್ಚಿನ ದರಗಳಿಗೆ ಅಂದರೆ ರೂ. 44,95,953/–ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 66 ಅಪಿಬಂ 2012 (ತಾಂತ್ರಿಕ), ಬೆಂಗಳೂರು, ದಿನಾಂಕ: 06ನೇ ಜೂನ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಸೂಳ್ಯ ತಾಲ್ಲೂಕು, ಬೆಳ್ಳಾರೆ ಗ್ರಾಮದ ಮುಡಾಯಿತೋಟ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 39,43,818/–ಗಳ ಮೇಲೆ ಶೇ. 14.00 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 44,95,953/–ಗಳಿಗೆ (ರೂ. ನಲವತ್ತನಾಲ್ಕು ಲಕ್ಷ ತೊಂಬತ್ತೈದು ಸಾವಿರದ ಒಂಬತ್ತು ನೂರ ಐವತ್ತ ಮೂರು ಮಾತ್ರ) ಕಾಮಗಾರಿಯನ್ನು ಶ್ರೀ ಚೇರ್ಕಳ ಮಲ್ಲ ಅಸ್ಸೈನಾರ್, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ರುದ್ರಮೂರ್ತಿ

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1626 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಉಡುಪಿ ಜಿಲ್ಲೆ, ಕಾರ್ಕಳ ತಾಲ್ಲೂಕು, ಮಾಳ ಗ್ರಾಮದ ಬಸರಾಜೆ ಕೊಪ್ಪಲಗುಂಡಿ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ:ಮುಸದ/ತಾಂಸ–5 ಸ.ಇಂ.11/ಉ.ಜಿ/ಕಾ.ತಾ/ಕೊಪ್ಪಲಗುಂಡಿ/ಇಪ್ರೊಕ್ಯೂರ್‌ಮೆಂಟ್ /ಟೆಂಡರ್ ಅನುಮೋದನೆ/2011/1780, ದಿನಾಂಕ:08–05–2012.

**ಪ್ರಸ್ತಾವನೆ :**

ಉಡುಪಿ ಜಿಲ್ಲೆ, ಕಾರ್ಕಳ ತಾಲ್ಲೂಕು, ಮಾಳ ಗ್ರಾಮದ ಬಸರಾಜೆ ಕೊಪ್ಪಲಗುಂಡಿ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ರೂ. 50.00 ಲಕ್ಷಗಳ ಅಂದಾಜು ಪಟ್ಟಿಗೆ ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ ವೃತ್ತ, ಮೈಸೂರು ಇವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ 3ನೇ ಬಾರಿಗೆ ಕರೆಯಲಾದ ಟೆಂಡರ್ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಉಡುಪಿ ಜಿಲ್ಲಾ ಟೆಂಡರ್ ಬುಲೆಟಿನ್ | 06–02–2012 |
| ಹೊಸದಿಗಂತ ಮತ್ತು ವಾರ್ತಾ ಭಾರತಿ ದಿನ ಪತ್ರಿಕೆ | 20–02–2012 |

ದಿನಾಂಕ 13–03–2012 ರಂದು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಟೆಂಡರ್ ಅನ್ನು ತೆರೆಯಲಾಗಿದ್ದು, ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರು ಟೆಂಡರ್ ಅರ್ಹತೆ ಹೊಂದಿದ್ದು, ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 49,06,427/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 49,32,307/– |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ರಾಜೇಶ್ ಕಾರಂತ್, ಒಂದನೇ ದರ್ಜೆ ಗುತ್ತಿಗೆದಾರರು | ರೂ. 55,19,730/– | 12.50 ಹೆಚ್ಚು | 11.9097 ಹೆಚ್ಚು |

ಮೇಲ್ಕಂಡಂತೆ ಶ್ರೀ ರಾಜೇಶ್ ಕಾರಂತ್, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 11.9097ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರ್‌ನ್ನು ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ. 11.80% ಹೆಚ್ಚಿನ ದರಗಳಿಗೆ ಅಂದರೆ ರೂ. 55,14,319/–ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 67 ಅಪಿಬಂ 2012 (ತಾಂತ್ರಿಕ), ಬೆಂಗಳೂರು, ದಿನಾಂಕ: 06ನೇ ಜೂನ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಡುಪಿ ಜಿಲ್ಲೆ, ಕಾರ್ಕಳ ತಾಲ್ಲೂಕು, ಮಾಳ ಗ್ರಾಮದ ಬಸರಾಜೆ ಕೊಪ್ಪಲಗುಂಡಿ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 49,32,307/–ಮೇಲೆ ಶೇ. 11.80 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 55,14,319/–ಗಳಿಗೆ (ರೂ. ಐವತ್ತೈದು ಲಕ್ಷ ಹದಿನಾಲ್ಕು ಸಾವಿರದ ಮುನ್ನೂರ ಹತ್ತೊಂಬತ್ತು ರೂಪಾಯಿಗಳು ಮಾತ್ರ) ಕಾಮಗಾರಿಯನ್ನು ಶ್ರೀ ರಾಜೇಶ್ ಕಾಮತ್, ಒಂದನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ರುದ್ರಮೂರ್ತಿ

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1627 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆ ಹಾಗೂ ತಾಲ್ಲೂಕಿನ ಪಟವಾಡ ಗ್ರಾಮದ ಹತ್ತಿರ ಮುಲ್ಲಮಾರಿ ನದಿಗೆ ಅಡ್ಡಲಾಗಿ ಬಿ.ಸಿ.ಬಿ. ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 12 ಮಸಾವಿ 2011(3) (ತಾಂತ್ರಿಕ) ದಿನಾಂಕ: 13–06–2011.

2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ: ಮುಇಂ/ಸನೀ(ಉ)ವಲಯ/ಬಿಜೆಪಿ/ಪಿಬಿ–14/2012–13/2932, ದಿನಾಂಕ: 22–05–2012.

**ಪ್ರಸ್ತಾವನೆ :**

ಭಾರತ ಸರ್ಕಾರದ ಎ.ಐ.ಬಿ.ಪಿ. ಕಾರ್ಯಕ್ರಮದಡಿ ಗುಲ್ಬರ್ಗಾ ಜಿಲ್ಲೆ ಹಾಗೂ ತಾಲ್ಲೂಕಿನ ಪಟವಾಡ ಗ್ರಾಮದ ಹತ್ತಿರ ಮುಲ್ಲಮಾರಿ ನದಿಗೆ ಅಡ್ಡಲಾಗಿ ಬಿ.ಸಿ.ಬಿ. ನಿರ್ಮಾಣ ಕಾಮಗಾರಿಯ ರೂ. 200.00 ಲಕ್ಷ ಮೊತ್ತದ ಅಂದಾಜು ಪಟ್ಟಿಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಗುಲ್ಬರ್ಗಾ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | 06–01–2012 |
| ಜಿಲ್ಲಾ ಟೆಂಡರ್ ಬುಲೆಟಿನ್ | 07–01–2012 |
| ವಿಜಯ ಕರ್ನಾಟಕ ದಿನ ಪತ್ರಿಕೆ | 07–01–2012 |
| ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್ ದಿನ ಪತ್ರಿಕೆ | 09–01–2012 |

ಇ–ಪ್ರೊಕ್ಯೂರ್‌ಮೆಂಟ್ ಮೂಲಕ ತಾಂತ್ರಿಕ ಬಿಡ್ ಅನ್ನು ತೆರೆದು ಪರಿಶೀಲಿಸಲಾಗಿ ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಆರು ಜನ ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿರುತ್ತಾರೆ. ಇವರ ಆರ್ಥಿಕ ಬಿಡ್ ಅನ್ನು ದಿನಾಂಕ: 10–05–2012ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 1,98,12,825/– |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 1,99,82,203/– |

| ಗುತ್ತಿಗೆದಾರರ ಹೆಸರು ಮತ್ತು ದರ್ಜೆ<br>ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|
| ರಿಯಾಜುದ್ದೀನ್ ಜಿ. ಪಟೇಲ್,<br>ಒಂದನೇ ದರ್ಜೆ ಗುತ್ತಿಗೆದಾರರು | ರೂ. 2,26,38,732/– | 14.26<br>ಹೆಚ್ಚು | 13.294<br>ಹೆಚ್ಚು |

ಮೇಲ್ಕಂಡಂತೆ ಶ್ರೀ ರಿಯಾಜುದ್ದೀನ್ ಜಿ. ಪಟೇಲ್, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 13.294ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 1,99,82,203/–ಗಳ ಮೇಲೆ ಶೇ. 12.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,24,79,978/–ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 70 ಅಪಿಬಿಂ (ತಾಂತ್ರಿಕ) 2012, ಬೆಂಗಳೂರು, ದಿನಾಂಕ: 06ನೇ ಜೂನ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆ ಹಾಗೂ ತಾಲ್ಲೂಕಿನ ಪಟವಾಡ ಗ್ರಾಮದ ಹತ್ತಿರ ಮುಲ್ಲಮಾರಿ ನದಿಗೆ ಅಡ್ಡಲಾಗಿ ಬಿ.ಸಿ.ಬಿ. ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತ ರೂ. 1,99,82,203/–ಗಳ ಮೇಲೆ ಶೇ.12.50 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 2,24,79,978/–ಗಳಿಗೆ (ರೂ. ಎರಡು ಕೋಟಿ ಇಪ್ಪತ್ತನಾಲ್ಕು ಲಕ್ಷ ಎಪ್ಪತ್ತೊಂಭತ್ತು ಸಾವಿರದ ಒಂಭೈನೂರ ಎಪ್ಪತ್ತೆಂಟು ಮಾತ್ರ)ಗಳಿಗೆ ಶ್ರೀ ರಿಯಾಜುದ್ದೀನ್ ಜಿ. ಪಟೇಲ್, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ರುದ್ರಮೂರ್ತಿ
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 1628

## ಕಂದಾಯ ಸಚಿವಾಲಯ

**ಸೇರ್ಪಡೆ**

**ಸಂಖ್ಯೆ : ಆರ್‌ಡಿ 33 ಎಡಿಇ 2012 ಬೆಂಗಳೂರು, ದಿನಾಂಕ : 12–06–2012**

ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 09 ಎಡಿಇ 2011, ದಿನಾಂಕ : 16–01–2012ರ ಆದೇಶದಲ್ಲಿ ಈ ಕೆಳಕಂಡ ಕಂಡಿಕೆಯನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

"ಈ ಇಲಾಖಾ ವಿಚಾರಣೆ ಕೈ ಬಿಟ್ಟಿರುವುದರಿಂದ ಶ್ರೀ ಕೃಷ್ಣಯ್ಯ ಎಸ್.ಆರ್. ಅವರ ಅಮಾನತ್ತಿನ ಅವಧಿ ದಿನಾಂಕ : 08–03–2011ರಿಂದ ದಿನಾಂಕ : 11–05–2011 ರವರೆಗೆ ಕರ್ನಾಟಕ ನಾಗರೀಕ ಸೇವಾ ನಿಯಮ 100(1)(ಬಿ)ರನ್ವಯ ಕರ್ತವ್ಯದ ಅವಧಿ ಎಂದು ಪರಿಗಣಿಸಿದೆ ಹಾಗೂ ಈ ಪ್ರಕರಣದ ಮಟ್ಟಿಗೆ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ನಿಯಮಾನುಸಾರ ಲಭ್ಯವಾಗಬಹುದಾದ ಎಲ್ಲ ಸೌಲಭ್ಯಗಳನ್ನು ಪಡೆಯಲು ಅರ್ಹರಾಗಿರುತ್ತಾರೆ".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ವಿ. ರಾಮಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 1641

## ಕಂದಾಯ ಸಚಿವಾಲಯ

**ವಿಷಯ :** ಶ್ರೀಮತಿ ಕೆ. ದಾಕ್ಷಾಯಿಣಿ, ಹಿಂದಿನ ತಹಶೀಲ್ದಾರ್, ಬಂಗಾರಪೇಟೆ ತಾಲ್ಲೂಕು, ಕೋಲಾರ ಜಿಲ್ಲೆ ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ಬಗ್ಗೆ.

**ಓದಲಾಗಿದೆ :**
1. ಅಧೀನ ಕಾರ್ಯದರ್ಶಿ, ರಾಜ್ಯ ಚುನಾವಣಾ ಆಯೋಗ, ಕರ್ನಾಟಕ ಇವರ ಪತ್ರ ಸಂಖ್ಯೆ : ರಾಚುಆ/247/ಇಜಿಪಿ/2010, ದಿನಾಂಕ : 08–07–2010.
2. ಜಿಲ್ಲಾಧಿಕಾರಿ, ಕೋಲಾರ ಇವರ ಪತ್ರ ಸಂಖ್ಯೆ : ಇಎಲ್ಎನ್(2)/ಸಿಆರ್/30/2010–11, ದಿನಾಂಕ : 28–07–2010.
3. ಅಧೀನ ಕಾರ್ಯದರ್ಶಿ, ರಾಜ್ಯ ಚುನಾವಣಾ ಆಯೋಗ, ಕರ್ನಾಟಕ ಇವರ ಪತ್ರ ಸಂಖ್ಯೆ : ರಾಚುಆ/247/ಇಜಿಪಿ/2010, ದಿನಾಂಕ : 14–12–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ.(1)ರ ದಿನಾಂಕ : 08–07–2010ರ ಪತ್ರದಲ್ಲಿ ಅಧೀನ ಕಾರ್ಯದರ್ಶಿ, ರಾಜ್ಯ ಚುನಾವಣಾ ಆಯೋಗ ಇವರು, ಬಂಗಾರಪೇಟೆ ತಾಲ್ಲೂಕು, ದೊಡ್ಡೂರು ಕರಪನಹಳ್ಳಿ ಗ್ರಾಮ ಪಂಚಾಯತಿಯ ಮತಗಟ್ಟೆ ಸಂಖ್ಯೆ : 65, 66/1, 66/2 ರಲ್ಲಿನ ಮತದಾರರ ಪಟ್ಟಿಯಲ್ಲಿ ನ್ಯೂನತೆಗಳು ಕಂಡುಬಂದಿರುತ್ತದೆ. ಇದರಿಂದಾಗಿ ಸದರಿ ಗ್ರಾಮ ಪಂಚಾಯತಿಯ ಗ್ರಾಮದವರು ಮತದಾನ ಬಹಿಷ್ಕರಿಸಿರುತ್ತಾರೆ. ಇದಕ್ಕೆ ಕಾರಣರಾದ ಶ್ರೀಮತಿ ಕೆ. ದಾಕ್ಷಾಯಿಣಿ, ಹಿಂದಿನ ತಹಶೀಲ್ದಾರ್, ಬಂಗಾರಪೇಟೆ ತಾಲ್ಲೂಕು ಅವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಕೋರಿ ದೋಷಾರೋಪಣಾ ಪಟ್ಟಿಯನ್ನು ಜಿಲ್ಲಾಧಿಕಾರಿ (ಪ್ರಭಾರ) ಕೋಲಾರ ಇವರು ದಿನಾಂಕ : 27–05–2010 ರಂದು ರಾಜ್ಯ ಚುನಾವಣಾ ಆಯೋಗಕ್ಕೆ ಸಲ್ಲಿಸಿರುತ್ತಾರೆ. ಸದರಿ ದೋಷಾರೋಪಣಾ ಪಟ್ಟಿಯಂತೆ ತಹಶೀಲ್ದಾರರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ.

ಸರ್ಕಾರವು ಸದರಿಯವರ ವಿರುದ್ಧ ಈ ಬಗ್ಗೆ ಕ್ರಮ ಕೈಗೊಳ್ಳಲು ಪರಿಶೀಲಿಸುತ್ತಿರುವಾಗ ಮೇಲೆ ಓದಲಾದ ಕ್ರ.ಸಂ.(2)ರ ದಿನಾಂಕ : 28–07–2010ರ ಪತ್ರದಲ್ಲಿ ಜಿಲ್ಲಾಧಿಕಾರಿ, ಕೋಲಾರ ಇವರು ಮತದಾರರ ಪಟ್ಟಿಯ ಮುಖಪುಟವು ಅದಲು ಬದಲಾಗಿದ್ದರಿಂದ ಅಭ್ಯರ್ಥಿಗಳಲ್ಲಿ ಹಾಗೂ ಸಾರ್ವಜನಿಕರಲ್ಲಿ ಗೊಂದಲ ಉಂಟಾಗಿ, ಮತದಾನ ಬಹಿಷ್ಕರಿಸಲ್ಪಟ್ಟಿದ್ದು, ನಂತರ ಮತದಾರರ ಪಟ್ಟಿಯನ್ನು ಸರಿಪಡಿಸಿ ಮರುಚುನಾವಣೆ ನಡೆಸಲಾಗಿರುತ್ತದೆ. ಆದ್ದರಿಂದ ಮತದಾರರ ಪಟ್ಟಿಯಲ್ಲಿನ ನ್ಯೂನತೆಗಳ ಬಗ್ಗೆ ತಹಶೀಲ್ದಾರೊಬ್ಬರನ್ನೇ ಜವಾಬ್ದಾರರನ್ನಾಗಿ ಮಾಡಲಾಗದೆಂದು ತಿಳಿಸಿ, ಅವರ ವಿರುದ್ಧ ಮಾಡಲಾದ ಆಪಾದನೆಗಳು ನಿರಾಧಾರವಾಗಿರುವುದರಿಂದ ಅವರ ವಿರುದ್ಧದ ಕ್ರಮವನ್ನು ಕೈಬಿಡುವಂತೆ ಕೋರಿರುತ್ತಾರೆ.

ಈ ಬಗ್ಗೆ ರಾಜ್ಯ ಚುನಾವಣಾ ಆಯೋಗದ ಅಭಿಪ್ರಾಯ ಪಡೆಯಲಾಗಿದ್ದು, ಮೇಲೆ ಓದಲಾದ ಕ್ರ.ಸಂ.(3)ರ ದಿನಾಂಕ : 14–12–2011ರ ಪತ್ರದಲ್ಲಿ ರಾಜ್ಯ ಚುನಾವಣಾ ಆಯೋಗವು ಸಹ ದಿನಾಂಕ : 20–07–2010ರ ಪತ್ರದಲ್ಲಿ ಜಿಲ್ಲಾಧಿಕಾರಿ, ಕೋಲಾರ ರವರು ತಿಳಿಸಿರುವ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತದೆ.

ಮೇಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ, ಮತದಾರರ ಪಟ್ಟಿ ಪ್ರಚುರಪಡಿಸುವ ಮುನ್ನ ಗ್ರಾಮಲೆಕ್ಕಾಧಿಕಾರಿ ಹಾಗೂ ರಾಜಸ್ವ ನಿರೀಕ್ಷಕರು ಮತದಾರರ ಪಟ್ಟಿ ಸರಿಯಾಗಿರುವ ಬಗ್ಗೆ ಶೇಕಡ 100 ರಷ್ಟು ದೃಢೀಕರಣ ಪತ್ರ ನೀಡಬೇಕಾಗುತ್ತದೆ. ಹಾಗೂ ತಹಶೀಲ್ದಾರರು Random ಆಗಿ ಪರಿಶೀಲಿಸಬೇಕಾಗಿರುತ್ತದೆ. ಪ್ರಸ್ತುತ ಪ್ರಕರಣದಲ್ಲಿ ಬಂಗಾರಪೇಟೆ ತಾಲ್ಲೂಕು, ದೊಡ್ಡೂರು ಕರಪನಹಳ್ಳಿ ಗ್ರಾಮ ಪಂಚಾಯತಿಯ ಮತದಾರರ ಪಟ್ಟಿಯನ್ನು ಗ್ರಾಮಲೆಕ್ಕಿಗರು, ಕಂದಾಯ ನಿರೀಕ್ಷಕರು ಶೇಕಡ 100 ರಷ್ಟು ದೃಢೀಕರಿಸಿರುತ್ತಾರೆ. ಸದರಿ ತಹಶೀಲ್ದಾರರು Random ಆಗಿ ಪರಿಶೀಲಿಸಿದಾಗ ಸದರಿ ಗ್ರಾಮದ ಮತದಾರರ ಪಟ್ಟಿಯಲ್ಲಿ ನ್ಯೂನತೆಗಳು ಕಂಡು ಬಂದಿರುವುದಿಲ್ಲ. ಆದರೆ, ಮತದಾರರ ಪಟ್ಟಿಯಲ್ಲಿನ ನ್ಯೂನತೆಗಳು ಮತದಾನದ ಹಿಂದಿನ ದಿನ ಬೆಳಕಿಗೆ ಬಂದಿರುವುದರಿಂದ ಅಷ್ಟು ಅಲ್ಪಾವಧಿಯಲ್ಲಿ ಅದನ್ನು ಸರಿಪಡಿಸಲು ಅವಕಾಶವಿರಲಿಲ್ಲ. ನಂತರ ಮತದಾರರ ಪಟ್ಟಿಯ ಮುಖಪುಟವನ್ನು ಸರಿಪಡಿಸಿ, ಮರುಚುನಾವಣೆ ನಡೆಸಿರುವುದರಿಂದ ಇನ್ನು ಮುಂದೆ ಈ ರೀತಿ ತಪ್ಪುಗಳಾಗದಂತೆ ಶ್ರೀಮತಿ ಕೆ. ದಾಕ್ಷಾಯಣಿ, ಹಿಂದಿನ ತಹಶೀಲ್ದಾರ್, ಬಂಗಾರಪೇಟೆ ತಾಲ್ಲೂಕು ಪ್ರಸ್ತುತ ತಹಶೀಲ್ದಾರ್, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ ಇವರಿಗೆ ಎಚ್ಚರಿಕೆ ನೀಡಿ ಪ್ರಕರಣವನ್ನು ಮುಕ್ತಾಯ ಮಾಡಲು ಸರ್ಕಾರವು ತೀರ್ಮಾನಿಸಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 45 ಎಡಿಇ 2010, ಬೆಂಗಳೂರು, ದಿನಾಂಕ: 07ನೇ ಜೂನ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೆ.ದಾಕ್ಷಾಯಿಣಿ, ಹಿಂದಿನ ತಹಶೀಲ್ದಾರ್, ಬಂಗಾರಪೇಟೆ ತಾಲ್ಲೂಕು ಪ್ರಸ್ತುತ ತಹಶೀಲ್ದಾರ್, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ, ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವ ಪ್ರಕರಣ ಕೈಬಿಡಲಾಗಿದೆ. ಮುಂದುವರೆದು, ಸದರಿ ಅಧಿಕಾರಿಗೆ ಇನ್ನು ಮುಂದೆ ಇಂತಹ ಪ್ರಕರಣ ಮರುಕಳಿಸದಂತೆ ನೋಡಿಕೊಳ್ಳಲು ಈ ಮೂಲಕ ಎಚ್ಚರಿಕೆ ನೀಡಲಾಗಿದೆ. ಸದರಿಯವರು ಈ ಪ್ರಕರಣದ ಮಟ್ಟಿಗೆ ವಿಚಾರಣೆ ನಡೆಯದಿದ್ದಲ್ಲಿ ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ವಿ. ರಾಮಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 1642

## ಕಂದಾಯ ಸಚಿವಾಲಯ

**ವಿಷಯ :** ಹಾವೇರಿ ಜಿಲ್ಲೆ, ಶಿಗ್ಗಾಂವ ತಾಲ್ಲೂಕಿನಲ್ಲಿ ಜಾನಪದ ವಿಶ್ವವಿದ್ಯಾಲಯ ಸ್ಥಾಪಿಸಲು ಭೂಮಿ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ :** ಪತ್ರ ಸಂಖ್ಯೆ : ಪ್ರಾಆಬೆ : ಭೂಮಿ : 4 : ಎಲ್‌ಜಿಎಲ್ : ವಿವ : 26 : 2011–12, ದಿನಾಂಕ : 07 12–2011.

**ಪ್ರಸ್ತಾವನೆ :**

ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರು ದಿನಾಂಕ : 07–12–2011ರಂದು ಪತ್ರ ಬರೆಯುತ್ತಾ ಹಾವೇರಿ ಜಿಲ್ಲೆ, ಶಿಗ್ಗಾಂವ ತಾಲ್ಲೂಕಿನಲ್ಲಿ ಈ ಕೆಳಗಿನಂತೆ ಒಟ್ಟು 122 ಎಕರೆ 19 ಗುಂಟೆ ಗಾಯರಾಣ/ಮುರಮ್‌ಖಣಿ, ಜಮೀನುಗಳನ್ನು ಜಾನಪದ ವಿಶ್ವವಿದ್ಯಾಲಯಕ್ಕೆ ಹಸ್ತಾಂತರಿಸಲು ಶಿಫಾರಸ್ಸು ಮಾಡಿದ್ದು ಸಂಬಂಧಪಟ್ಟ ಭೂಮಿಗಳ ವಿವರ ಕೆಳಗಿನಂತಿವೆ :–

**ಭಾಗ – 1**

| ಕ್ರ.ಸಂ. | ಗ್ರಾಮದ ಹೆಸರು | ರಿ.ಸ.ನಂ. | ಭೂಮಿಯ ವಿಸ್ತೀರ್ಣ (ಎಕರೆ : ಗುಂಟೆ) | ಭೂಮಿಯ ಗುಣಲಕ್ಷಣ |
|---|---|---|---|---|
| 1. | ಗೊಟಿಗೋಡಿ | 116ಎ | 7–38 | ಮುಫತ ಗಾಯರಾಣ |
| 2. | ಶೀಲವಂತಸೋಮಾಪುರ | 51 | 9–18 | ಮುಫತ ಗಾಯರಾಣ |
| 3. | ಹುಲಸೋಗಿ | 107/ಅ | 9–02 | ಹುಲ್ಲುಗಾವಲು |
| 4. | ಅಡವಿಸೋಮಾಪುರ | 76 | 3–11 | ಖರಾಬ ಸುತ್ತಿನ ಗುಡ್ಡ |
| 5. | ತಡಸ | 168 | 11–12 | ಮುಫತ ಗಾಯರಾಣ |
| 6. | ಗುಡಗೇರಿ | 16 | 19–37 | ಪರಂಪೋಕು |
| 7. | ಹಿರೇಬೆಂಡಿಗೇರಿ | 70/1ಅ | 3–09 | ಸರ್ಕಾರಿ ರಿತ್ತಿಗುಡ್ಡ |
| 8. | ನಿಡಗುಂದಿ | 42ಪಿ/ಅ | 56–19 | ಖರಾಬು ಗುಡ್ಡ |
| | ಒಟ್ಟು | | 120–26 | |

ಭಾಗ–2

| ಗ್ರಾಮದ ಹೆಸರು | ರಿ.ಸ.ನಂ. | ಭೂಮಿಯ ವಿಸ್ತೀರ್ಣ (ಎಕರೆ : ಗುಂಟೆ) | ಭೂಮಿಯ ಗುಣಲಕ್ಷಣ |
|---|---|---|---|
| ತಿಮ್ಮಾಪುರ | 10ಎ | 1–33 | ಮುರಮ್‌ಖನಿ |
| (ಭಾಗ–1 ಮತ್ತು 2) ಒಟ್ಟು | | 122–19 | |

ಈ ಮೇಲೆ ಭಾಗ–1ರಲ್ಲಿ ನಮೂದಿಸಿದ ಜಮೀನುಗಳು ಗಾಯರಾಣ ಜಮೀನುಗಳು ಆಗಿರುತ್ತವೆ. ಭಾಗ–2ರಲ್ಲಿ ನಮೂದಿಸಿರುವ ಜಮೀನು ಮುರಮ್‌ಖಣಿ ಜಮೀನು ಆಗಿದ್ದು ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಸೇರಿರುತ್ತದೆ. ಸದರಿ ಜಮೀನನ್ನು ಜಾನಪದ ವಿಶ್ವವಿದ್ಯಾಲಯಕ್ಕೆ ಹಸ್ತಾಂತರಿಸಲು ಆ ಇಲಾಖೆಯ ಅಭ್ಯಂತರ ಇರುವುದಿಲ್ಲ.

ಹಿರೇಬೆಂಡೀಗೇರಿ, ದುಂಡಸಿ, ತಡಸ, ಕುಣ್ಣೂರು, ಮತ್ತು ಹೊನ್ನಾಳಿ ಗ್ರಾಮ ಪಂಚಾಯ್ತಿಗಳು ವಿವಿಧ ದಿನಾಂಕಗಳಂದು ಸಭೆ ನಡೆಸಿ ಸಂಬಂಧಪಟ್ಟ ಜಮೀನುಗಳನ್ನು ಜಾನಪದ ವಿಶ್ವವಿದ್ಯಾಲಯಕ್ಕೆ ಹಸ್ತಾಂತರಿಸಲು ಠರಾವು ಪಾಸು ಮಾಡಿರುತ್ತವೆ.

ನಿಡಗುಂದಿ ಗ್ರಾಮದ ಗ್ರಾಮಸ್ಥರು ಸ.ನಂ. 42ಪಿ/1ರಲ್ಲಿ ನಮೂದಿಸಿರುವ ಜಮೀನು ಸ್ಮಶಾನಕ್ಕೆ ಬೇಕಾದ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಕೈಬಿಡುವಂತೆ ನಿಡಗುಂದಿ ಗ್ರಾಮಸ್ಥರು ಆಗ್ರಹಿಸಿದ್ದರು. ಇದಕ್ಕೆ ಪರ್ಯಾಯ ವ್ಯವಸ್ಥೆ ಮಾಡಲು ಕೈಗೊಂಡು ಸದರಿ ಜಮೀನನ್ನು ಕರ್ನಾಟಕ ಜಾನಪದ ವಿಶ್ವವಿದ್ಯಾಲಯಕ್ಕೆ ಹಸ್ತಾಂತರಿಸಲು ಜಿಲ್ಲಾಧಿಕಾರಿ ಇವರು ಶಿಫಾರಸ್ಸು ಮಾಡಿರುತ್ತಾರೆ.

ಸರ್ಕಾರದ ಅಧಿಸೂಚನೆ ಸಂಖ್ಯೆ : ಸಂವ್ಯಶಾಇ :33ಶಾಸನ:2011, ದಿನಾಂಕ : 22–07–2011ರ ಪ್ರಕಾರ ಜಾನಪದ ವಿಶ್ವವಿದ್ಯಾಲಯದ ಕೇಂದ್ರ ಕಾರ್ಯಸ್ಥಾನವು ಹಾವೇರಿ ಜಿಲ್ಲೆಯ ಶಿಗ್ಗಾಂವ್ ತಾಲ್ಲೂಕಿನ ಗೋಟಗೋಡಿ ಪ್ರದೇಶದ 10 ಕಿ.ಮೀ. ಪರಧಿಯೊಳಗಿರತಕ್ಕದ್ದು.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 76 ಎಲ್‌ಜಿಡಿ 2011 ಬೆಂಗಳೂರು, ದಿನಾಂಕ: 07ನೇ ಜೂನ್ 2012**

ಹಾವೇರಿ ಜಿಲ್ಲೆ, ಶಿಗ್ಗಾಂವ್ ತಾಲ್ಲೂಕಿನಲ್ಲಿ ಜಾನಪದ ವಿಶ್ವವಿದ್ಯಾಲಯ ಸ್ಥಾಪಿಸಲು ಒಟ್ಟು 122–19 ಎಕರೆ ವಿಸ್ತೀರ್ಣದ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳ (1966) ನಿಯಮ 97(4)ರಡಿ ಗಾಯರಾಣ ಶೀರ್ಷಿಕೆಯಿಂದ ತಗ್ಗಿಸಿ ಕರ್ನಾಟಕ ಭೂ ಕಂದಾಯ ಕಾಯ್ದೆ (1964) ಅಧಿನಿಯಮ 71ರ ಮೇರೆಗೆ ಜಾನಪದ ವಿಶ್ವವಿದ್ಯಾಲಯಕ್ಕೆ ಮುಫತ್ತಾಗಿ ಹಸ್ತಾಂತರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಜೆ. ಲಕ್ಷ್ಮೀನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1643 ಕಂದಾಯ ಇಲಾಖೆ (ಭೂ ಮಂಜೂರಾತಿ–3)

## ಕಂದಾಯ ಸಚಿವಾಲಯ

**ವಿಷಯ :** ಮಾಜಿ ಅನುವಂಶಿಕ ಪಟೇಲರುಗಳಿಗೆ ಹಾಲಿ ಕೊಡುತ್ತಿರುವ ಮಾಸಿಕ 1000/–ರೂ.ಗಳ ಬದಲಾಗಿ ರೂ. 1250/–ರೂಗಳನ್ನು ಅನುಕಂಪ ಭತ್ಯೆ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಕಂಇ 443 ಎಂವಿಎಸ್ (1)/84 ದಿನಾಂಕ : 20–09–1984.
2. ಸರ್ಕಾರದ ಕಂಇ 286 ಎಂವಿಎಸ್ 91 ದಿನಾಂಕ : 30–05–1994.
3. ಸರ್ಕಾರದ ಆದೇಶ ಸಂಖ್ಯೆ : ಕಂಇ 295 ಎಂವಿಎಸ್ 2006, ದಿನಾಂಕ : 18–02–2009.
4. ಕರ್ನಾಟಕ ಮಾಜಿ ಪಟೇಲರುಗಳ ಸಂಘದ ಮನವಿ ದಿನಾಂಕ : 05–09–2011.

**ಪ್ರಸ್ತಾವನೆ :**

ದಿನಾಂಕ : 01–02–1963 ರಿಂದ ಜಾರಿಗೆ ಬಂದ ಕರ್ನಾಟಕ ಗ್ರಾಮಾಧಿಕಾರಿಗಳ ರದ್ಧತಿ ಕಾಯ್ದೆಯ ಪರಿಣಾಮವಾಗಿ ಅನುವಂಶಿಕ ಹಕ್ಕು ಅಧಿಕಾರ ಕಳೆದುಕೊಂಡ ಮಾಜಿ ಪಟೇಲರುಗಳಿಗೆ ಮಾಸಿಕ 100/– ರೂಪಾಯಿಗಳ ಅನುಕಂಪ ಭತ್ಯೆಯನ್ನು ದಿನಾಂಕ : 01–08–1984 ರಿಂದ ಜಾರಿಗೆ ಬರುವಂತೆ ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ಷರತ್ತುಗಳಿಗನುಗುಣವಾಗಿ ಮಂಜೂರು ಮಾಡಲಾಗಿತ್ತು. ನಂತರ ಸರ್ಕಾರದ ಆದೇಶ ಸಂಖ್ಯೆ : ಕಂಇ 286 ಎಂವಿಎಸ್ 1991 ದಿನಾಂಕ : 30–05–1994ರಲ್ಲಿ ಈ ಅನುಕಂಪ ಭತ್ಯೆಯನ್ನು ರೂ. 100/– ರಿಂದ ರೂ. 500ಕ್ಕೆ ಹೆಚ್ಚಿಸಿ ದಿನಾಂಕ : 01–01–1994 ರಿಂದ ಜಾರಿಗೆ ಬರುವಂತೆ ಆದೇಶಿಸಿದೆ. ಮುಂದುವರೆದು ಓದಲಾದ ಕ್ರಮಸಂಖ್ಯೆ (3)ರ ಸರ್ಕಾರಿ ಆದೇಶ ಸಂಖ್ಯೆ : ಕಂಇ 295 ಎಂವಿಎಸ್ 2006 ದಿನಾಂಕ : 18–02–2009ರಲ್ಲಿ ಅನುಕಂಪ ಭತ್ಯೆಯನ್ನು ನವೆಂಬರ್ 2008ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ರೂ. 500 ರಿಂದ 1000/– ರೂಗಳಂತೆ ಪಾವತಿಸಲು ಆದೇಶಿಸಲಾಗಿದೆ.

ಪ್ರಸ್ತುತ ನೀಡಲಾಗುತ್ತಿರುವ ಅನುಕಂಪ ಭತ್ಯೆ 1000/– ರೂಪಾಯಿಗಳು ಈಗಿನ ದುಭಾರಿ ವೆಚ್ಚದಲ್ಲಿ ಏನೂ ಸಾಕಾಗುವುದಿಲ್ಲವಾದ್ದರಿಂದ ಈಗ ಕೊಡುತ್ತಿರುವ 1000/– ರೂ. ಗಳಿಂದ 4000/– ರೂಗಳಿಗೆ ಹೆಚ್ಚಿಸುವಂತೆ ಅಧ್ಯಕ್ಷರು, ಕರ್ನಾಟಕ ರಾಜ್ಯ ಮಾಜಿ ಪಟೇಲರ ಸಂಘ, ಬೆಂಗಳೂರು ಇವರು ದಿನಾಂಕ : 03–01–2012 ರಂದು ಮಾನ್ಯ ಮುಖ್ಯಮಂತ್ರಿಯವರಿಗೆ ಮನವಿ ಸಲ್ಲಿಸಿ ವಿನಂತಿಸಿಕೊಂಡಿದ್ದಾರೆ.

ಈ ಬಗ್ಗೆ ಎಲ್ಲಾ ಜಿಲ್ಲಾಧಿಕಾರಿಗಳೊಂದಿಗೆ ವ್ಯವಹರಿಸಲಾಗಿ, ಪ್ರಸ್ತುತ ರಾಜ್ಯದಲ್ಲಿ ಒಟ್ಟು 2517 ಮಂದಿ ಪಟೇಲರುಗಳು ಇರುತ್ತಾರೆ. ಈಗ ಸದರಿ ಪಟೇಲರುಗಳಿಗೆ ನೀಡುತ್ತಿರುವ 1000/– ರೂಗಳ ಗೌರವಧನ ಇಂದಿನ ದುಬಾರಿ ಕಾಲದಲ್ಲಿ ತುಂಬಾ ಕಡಿಮೆ ಇರುವುದರಿಂದ ಹಾಗೂ ಸಾಮಾನ್ಯವಾಗಿ ಎಲ್ಲಾ ಪಟೇಲರುಗಳಿಗೂ 60 ರಿಂದ 70 ವರ್ಷ ವಯಸ್ಸು ಆಗಿರುವುದರಿಂದ ಹಾಗೂ ಅನೇಕ ಪಟೇಲರು ಅನಾರೋಗ್ಯ ಪೀಡಿತರಾಗಿರುವುದರಿಂದ ಈಗ ನೀಡುತ್ತಿರುವ 1000/– ರೂಗಳಿಂದ 4000/– ರೂಗಳಿಗೆ ಹೆಚ್ಚಿಸುವುದು ಸೂಕ್ತವಾಗಿರುತ್ತದೆ ಎಂಬ ಅಭಿಪ್ರಾಯವನ್ನು ಜಿಲ್ಲಾಧಿಕಾರಿಗಳು ವ್ಯಕ್ತಪಡಿಸಿದ್ದಾರೆ.

ಈ ಮೇಲ್ಕಂಡ ಕಾರಣಗಳಿಂದ ಮಾನ್ಯ ಮುಖ್ಯಮಂತ್ರಿಯವರು ಈಗ ಕೊಡುತ್ತಿರುವ ಗೌರವ ಧನವನ್ನು 1000/– ರೂಗಳಿಂದ 1250/– ರೂಗಳಿಗೆ ಹೆಚ್ಚಿಸುವ ಅನುಮೋದನೆ ನೀಡಿದ್ದಾರೆ. ಈ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಪರಿಗಣಿಸಲು ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿತ್ತು. ಅದರಂತೆ ಆರ್ಥಿಕ ಇಲಾಖೆಯ ಈ ಕೆಳಕಂಡಂತೆ ಅಭಿಪ್ರಾಯ/ಸಹಮತಿ ನೀಡಿರುತ್ತದೆ.

ಮಾಜಿ ಪಟೇಲರಿಗೆ ಈಗ ನೀಡುತ್ತಿರುವ ಅನುಕಂಪ ಭತ್ಯೆಯನ್ನು 1000/– ರೂಗಳಿಂದ 1250/–ರೂಗಳಿಗೆ ಹೆಚ್ಚಿಸಲು ಮಾನ್ಯ ಮುಖ್ಯಮಂತ್ರಿಯವರ ಅನುಮೋದನೆ ಪಡೆದು ಆಡಳಿತ ಇಲಾಖೆ ನಿರ್ಣಯಿಸಿರುವುದರಿಂದ ಆರ್ಥಿಕ ಇಲಾಖೆ ಪ್ರಸ್ತಾವನೆಗೆ ಸಹಮತಿಸಿದೆ. ಈ ಸಂಬಂಧ ತಗಲುವ ಹೆಚ್ಚುವರಿ ವೆಚ್ಚವನ್ನು ಈ ಸಾಲಿನಲ್ಲಿ ಆಡಳಿತ ಇಲಾಖೆಗೆ ಒದಗಿಸಿರುವ ಆಯವ್ಯಯದ ಲಭ್ಯತೆಯ ಮಿತಿಯಲ್ಲಿಯೇ ಭರಿಸುವ ಷರತ್ತಿಗೆ ಒಳಪಟ್ಟು ಒಪ್ಪಲಾಗಿದೆ ಎಂದು ತಿಳಿಸಿದೆ.

ಈ ಮೇಲಿನ ಆರ್ಥಿಕ ಇಲಾಖೆಯ ಅಭಿಪ್ರಾಯ/ಸಹಮತಿಯ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯದ ಒಟ್ಟು 2517 ಮಾಜಿ ಪಟೇಲರುಗಳಿಗೆ ಈಗ ಕೊಡುತ್ತಿರುವ ಅನುಕಂಪ ಭತ್ಯೆಯನ್ನು ದಿನಾಂಕ : 01–05–2012 ರಿಂದ ಜಾರಿಗೆ ಬರುವಂತೆ ಮಾಹೆಯಾನ 1000/– ರೂಗಳಿಂದ 1250/– ರೂಗಳಿಗೆ ಹೆಚ್ಚಿಸಲು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 158 ಎಂವಿಎಸ್ 2010 ಬೆಂಗಳೂರು, ದಿನಾಂಕ: 07ನೇ ಜೂನ್ 2012**

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಹಾಲಿ ಮಾಜಿ ಅನುವಂಶಿಕ ಪಟೇಲರುಗಳಿಗೆ ಈಗ ನೀಡುತ್ತಿರುವ ಮಾಹೆಯಾನ 1000/– ರೂಗಳ ಅನುಕಂಪ ಭತ್ಯೆಯನ್ನು 01–05–2012 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಮಾಹೆಯಾನ 1250/– ರೂಗಳಂತೆ ಪಾವತಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2029–00–101–0–01–015 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಅಡ್‌ಹಾಕ್ ಭತ್ಯೆಗೆ ತುಟ್ಟಿ ಭತ್ಯೆ ಕೊಡುವುದಿಲ್ಲ. ಈ ಮಾಸಿಕ ಅನುಕಂಪ ಭತ್ಯೆಯನ್ನು ಅನುಕಂಪ ಆಧಾರದ ಮೇಲೆ ಕೊಡಲಾಗಿದ್ದು ಪಿಂಚಣಿ ನಿಯಮಗಳು ಇದಕ್ಕೆ ಅನ್ವಯಿಸುವುದಿಲ್ಲ ಮತ್ತು ಈ ಭತ್ಯೆ ಅನುಕಂಪ ಭತ್ಯೆಯಾಗಿರುವುದರಿಂದ ಇವರ ಕುಟುಂಬದವರು ಯಾವುದೇ ಕುಟುಂಬ ನಿವೃತ್ತಿ ವೇತನಕ್ಕೆ ಅರ್ಹರಿರುವುದಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : 56 ವೆಚ್ಚ 7/2012 ದಿನಾಂಕ: 10–05–2012 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಭಾನುಮತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–ಎ)

ಪಿ.ಆರ್. 1644

## ಇಂಧನ ಸಚಿವಾಲಯ

**ವಿಷಯ :** ಮೆ॥ ಸರೋವರ ಎನರ್ಜಿ ಪ್ರೈವೇಟ್ ಲಿಮಿಟೆಡ್ ರವರ 1.26 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 378 ಎನ್‌ಸಿಇ 2004, ದಿನಾಂಕ : 21–12–2004.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 220 ಎನ್‌ಸಿಇ 2006, ದಿನಾಂಕ : 23–06–2006.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 181 ಎನ್‌ಸಿಇ 2007, ದಿನಾಂಕ : 16–05–2007.
4. ಸರ್ಕಾರಿ ಆದೇಶ ಸಂಖ್ಯೆ : ಇಎನ್ 233 ಎನ್‌ಸಿಇ 2010, ದಿನಾಂಕ : 28–09–2010.
5. ಸರ್ಕಾರಿ ಆದೇಶ ಸಂಖ್ಯೆ : ಇಎನ್ 235 ಎನ್‌ಸಿಇ 2011, ದಿನಾಂಕ : 31–05–2011.
6. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/SH-187/2011–12/1490 ದಿನಾಂಕ :25–05–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಅಗ್ರಹಾರ ಗ್ರಾಮದ ಬಳಿ NRBC Distributory ಸಂಖ್ಯೆ : 18ಕ್ಕೆ ಅಡ್ಡಲಾಗಿ 1.3 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಮೆ॥ ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಅಗ್ರಹಾರ ಗ್ರಾಮದ ಬಳಿ NRBC Distributory ಸಂಖ್ಯೆ : 18ಕ್ಕೆ ಅಡ್ಡಲಾಗಿ ಹಂಚಿಕೆ ಮಾಡಿರುವ 1.3 ಮೆಗಾ ವ್ಯಾಟ್ ಸಾಮರ್ಥ್ಯವನ್ನು 1.475 ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಮೆ॥ ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಎಂಬ ಹೆಸರನ್ನು ಮೆ॥ ಸರೋವರ ಎನರ್ಜಿ ಪ್ರೈವೇಟ್ ಲಿಮಿಟೆಡ್ ಎಂದು ಬದಲಾವಣೆ ಮಾಡಿ 1.475 ಮೆಗಾ ವ್ಯಾಟ್ ಸಾಮರ್ಥ್ಯದ ಅಗ್ರಹಾರ ಕಿರು ಜಲ ವಿದ್ಯುತ್ ಯೋಜನೆಯನ್ನು Chainage 4.5 KM to 6.5 KM (925 KW) ಮತ್ತು Chainage 11.5 KM to 13.5 KM (550 KW) ಎಂದು ಎರಡು ಹಂತದಲ್ಲಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಸರ್ಕಾರಿ ಆದೇಶದಲ್ಲಿ ಈ ಕಿರುಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶವನ್ನು ದಿನಾಂಕ : 29–05–2010 ರಿಂದ ದಿನಾಂಕ : 28–05–2012 ರವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಆದೇಶದಲ್ಲಿ ಮೆ॥ ಸರೋವರ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಅಗ್ರಹಾರ ಗ್ರಾಮದ ಬಳಿ NRBC Distributory ಸಂಖ್ಯೆ : 18ಕ್ಕೆ Chainage 4.5 KM to 6.5 KMನಲ್ಲಿ ಅನುಮತಿಸಲಾದ 925 KW ಸಾಮರ್ಥ್ಯವನ್ನು 708 ಕಿಲೋವ್ಯಾಟ್ ಸಾಮರ್ಥ್ಯಕ್ಕೆ ಕಡಿಮೆಗೊಳಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಸರೋವರ ಎನರ್ಜಿ ಪ್ರೈವೇಟ್ ಲಿಮಿಟೆಡ್‌ರವರು ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಎಲ್ಲ ಅನುಮೋದನೆಗಳನ್ನು ಪಡೆದಿದ್ದು, ಯೋಜನೆಯನ್ನು ಸೆಪ್ಟೆಂಬರ್ 2012 ರೊಳಗೆ ಅನುಷ್ಠಾನಗೊಳಿಸಲು ಯೋಜಿಸಿರುವುದರಿಂದ 1.26 ಮೆ.ವ್ಯಾ. ಸಾಮರ್ಥ್ಯದ ಅಗ್ರಹಾರ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ದಿನಾಂಕ : 29–05–2012 ರಿಂದ ಮುಂದಿನ 12 ತಿಂಗಳಿಗೆ ಕಾಲಾವಕಾಶವನ್ನು ವಿಸ್ತರಿಸಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 169 ಎನ್‌ಸಿಇ 2012 ಬೆಂಗಳೂರು, ದಿನಾಂಕ: 12ನೇ ಜೂನ್ 2012**

ಮೆ॥ ಸರೋವರ ಎನರ್ಜಿ ಪ್ರೈವೇಟ್ ಲಿಮಿಟೆಡ್‌ರವರಿಗೆ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಅಗ್ರಹಾರ ಗ್ರಾಮದ ಬಳಿ NRBC Distributory ಸಂಖ್ಯೆ : 18ಕ್ಕೆ ಅಡ್ಡಲಾಗಿ ಹಂಚಿಕೆ ಮಾಡಿರುವ 1.26 ಮೆ.ವ್ಯಾ. ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಅಂತಿಮವಾಗಿ ಕಾಲಾವಕಾಶವನ್ನು ದಿನಾಂಕ : 29–05–2012 ರಿಂದ ಡಿಸೆಂಬರ್ 2012ರ ಅಂತ್ಯದವರೆಗೆ ವಿಸ್ತರಿಸಿ ಆದೇಶಿಸಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

ಪಿ.ಆರ್. 1645

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** 2012–13ನೇ ಸಾಲಿನಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ರೂ. 15.00 ಕೋಟಿಗಳ ಕ್ರಿಯಾ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ವಿಯಇ 58 ವಿತ್ರಮ 2012, ದಿನಾಂಕ : 05–04–2012.
2. ದಿನಾಂಕ : 29–12–2011 ರಂದು ನಡೆದ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ 8ನೇ ಸಭೆಯಲ್ಲಿನ ತೀರ್ಮಾನ.
3. ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಇವರ ಪತ್ರ ಸಂಖ್ಯೆ : VGST/PROGRAMMES/ADMN/2012-13/95, ದಿನಾಂಕ : 18–05–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗದ 2012–13ನೇ ಸಾಲಿನ ಮುಂದುವರೆದ ಯೋಜನೆ/ಕಾರ್ಯಕ್ರಮಗಳಿಗೆ ಆಯವ್ಯಯ ಹಂಚಿಕೆ ಹಾಗೂ ಅನುಮೋದನೆ ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ದಿನಾಂಕ : 29–12–2011 ರಂದು ನಡೆದ 8ನೇ ಸಭೆಯಲ್ಲಿ ವಿಜ್ಞಾನ ಶಿಕ್ಷಣ ಕಾರ್ಯಕ್ರಮಗಳನ್ನು ಹಾಗೂ ಕರ್ನಾಟಕ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಮೂಲ ಸೌಕರ್ಯಾಭಿವೃದ್ಧಿಗೆ ನಿಧಿ (K-FIST) ಕಾರ್ಯಕ್ರಮಗಳನ್ನು 2012–13ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲು ಆಯವ್ಯಯ ಅಂದಾಜು ವೆಚ್ಚದಲ್ಲಿ ನಿಗದಿಪಡಿಸಿರುವ ರೂ. 15.00 ಕೋಟಿಗಳಿಗೆ ಕಾರ್ಯಕ್ರಮವನ್ನು ರೂಪಿಸಿರುತ್ತದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಕಾರ್ಯನಿರ್ವಾಹಕ ಕಾರ್ಯದರ್ಶಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಇವರ ಪತ್ರದಲ್ಲಿ ದಿನಾಂಕ : 29–12–2011 ರಂದು ನಡೆದ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ 7ನೇ ಸಭೆಯ ತೀರ್ಮಾನದಂತೆ ರೂ. 15.00 ಕೋಟಿಗಳ ವೆಚ್ಚದಲ್ಲಿ ವಿಜ್ಞಾನ ಶಿಕ್ಷಣ ಕಾರ್ಯಕ್ರಮಗಳನ್ನು ಹಾಗೂ ಕರ್ನಾಟಕದ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಮೂಲ ಸೌಕರ್ಯಾಭಿವೃದ್ಧಿ ನಿಧಿ (K-FIST) ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಕ್ರಿಯಾ ಯೋಜನೆಯನ್ನು ಸಲ್ಲಿಸಿ ಆಡಳಿತಾತ್ಮಕ ಮಂಜೂರಾತಿ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಿಯಇ 100 ವಿತ್ರಮ 2012 ಬೆಂಗಳೂರು, ದಿನಾಂಕ: 25ನೇ ಜೂನ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ 2012–13ನೇ ಸಾಲಿನ ರೂ. 10.00 ಕೋಟಿ (ರೂಪಾಯಿ ಹತ್ತು ಕೋಟಿಗಳು ಮಾತ್ರ) ಕಾರ್ಯಕ್ರಮಗಳನ್ನು ಹಾಗೂ ಕರ್ನಾಟಕದ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಮೂಲ ಸೌಕರ್ಯಾಭಿವೃದ್ಧಿಗೆ ನಿಧಿ (K-FIST) ರೂ. 5.00 ಕೋಟಿಗಳ ಕಾರ್ಯಕ್ರಮಗಳನ್ನು (ರೂಪಾಯಿ ಐದು ಕೋಟಿಗಳು ಮಾತ್ರ) ವೆಚ್ಚದಲ್ಲಿ ಅನುಬಂಧ–1 ಮತ್ತು ಅನುಬಂಧ–2 ರಲ್ಲಿರುವಂತೆ ಅನುಷ್ಠಾನಗೊಳಿಸಲು ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ.

ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ವೆಚ್ಚವನ್ನು ಲೆಕ್ಕಶೀರ್ಷಿಕೆ 3425–60–600–0–02(059)(ಯೋ) ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ ಇದರಡಿ ಮತ್ತು ಕರ್ನಾಟಕದ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಸುಧಾರಣೆಗೆ ಕರ್ನಾಟಕ ನಿಧಿ (K-FIST) ವೆಚ್ಚವನ್ನು ಲೆಕ್ಕಶೀರ್ಷಿಕೆ 3425–60–600–0–032(059)(ಯೋ) ಇದರಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 4 ಟಿಎಫ್‌ಪಿ 2012, ದಿನಾಂಕ : 27–04–2011ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ನೀಡಲಾದ ಪ್ರದತ್ತವಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಮದ್ವಾವಿ ಎ.ಎಸ್.**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,

ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಅನುಬಂಧ - 1

**ಸರ್ಕಾರಿ ಆದೇಶ ಸಂಖ್ಯೆ : ವಿಯಇ 100 ವಿತ್ರಮ 2012, ದಿನಾಂಕ : 25-05-2012.**

**ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ 2012-13ನೇ ಸಾಲಿನ ಮುಂದುವರೆದ ಯೋಜನಾ ಕಾರ್ಯಕ್ರಮಗಳು**

| ಕ್ರ.ಸಂ. | ಕ್ರಿಯಾ ಯೋಜನೆಯ ಕಾರ್ಯಕ್ರಮಗಳು | ಕಾರ್ಯಕ್ರಮ ಅನುಷ್ಠಾನಗೊಳಿಸುವ ಇಲಾಖೆ/ಅಂಗ ಸಂಸ್ಥೆಗಳ ವಿವರ | ನಿಗದಿಪಡಿಸಿರುವ ಅಂದಾಜು ವೆಚ್ಚ ರೂ. ಲಕ್ಷಗಳಲ್ಲಿ |
|---|---|---|---|
| 1 | ಕರ್ನಾಟಕ ವಿಜ್ಞಾನ ವಿದ್ಯಾ ಜಾಗೃತಿ (ಜಿಲ್ಲಾ ಹಂತದ ವಿಜ್ಞಾನಿ-ವಿದ್ಯಾರ್ಥಿ ನೇರ ಸಂವಾದ ಕಾರ್ಯಕ್ರಮ) (KVVJ) | ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು | 68.00 |
| 2 | ಕರ್ನಾಟಕ ವಿಜ್ಞಾನ ಶಿಬಿರ (KVS) | ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು | 10.00 |
| 3. | ಪ್ರೌಢ ಶಾಲಾ ವಿಜ್ಞಾನ ಅಧ್ಯಾಪಕರಿಗೆ ಪುನಶ್ಚೇತನ ತರಬೇತಿ ಕಾರ್ಯಾಗಾರಗಳು (RC-HS) | ಡಿ.ಎಸ್.ಇ.ಆರ್.ಟಿ. ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳು | 12.00 |
| 4 | ಪದವಿ ಪೂರ್ವ ಕಾಲೇಜುಗಳ ವಿಜ್ಞಾನ ಅಧ್ಯಾಪಕರಿಗೆ ಪುನಶ್ಚೇತನ ತರಬೇತಿ ಕಾರ್ಯಾಗಾರಗಳು (RC-PU) | ಪದವಿ ಪೂರ್ವ ಶಿಕ್ಷಣ ಇಲಾಖೆ ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳು | 12.00 |
| 5 | ಪದವಿ ಕಾಲೇಜುಗಳ ವಿಜ್ಞಾನ ಅಧ್ಯಾಪಕರಿಗೆ ತರಬೇತಿ ಕಾರ್ಯಾಗಾರಗಳು (FDP-UG) | ರಾಜ್ಯದ ವಿಶ್ವವಿದ್ಯಾಲಯಗಳು ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳು | 12.00 |
| 6 | ಇಂಜಿನಿಯರಿಂಗ್ ಕಾಲೇಜುಗಳ ಬೋಧಕರಿಗೆ ತರಬೇತಿ ಕಾರ್ಯಾಗಾರಗಳು (FDP-VTU) | ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ ಮತ್ತು ವಿ.ತಂ.ದಾ.ಸ | 40.00 |
| 7 | ಯುವ ವಿಜ್ಞಾನಿಗಳಿಗೆ ಸಂಶೋಧನೆಗಾಗಿ ಮೂಲಧನ (SMYSR) | ವಿ.ತಂ.ದಾ.ಸ. | 100.00 |
| 8 | ಪದವಿ ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳ ನುರಿತ ವಿಜ್ಞಾನಿಗಳ ಮಾರ್ಗದರ್ಶನದಲ್ಲಿ ವಿಜ್ಞಾನದ ಸರಳ ಯೋಜನೆಗಳನ್ನು ಕೈಗೊಳ್ಳಲು ಸಹಾಯಾನುದಾನದ ನೆರವು (SPICE) | ವಿ.ತಂ.ದಾ.ಸ. | 18.00 |
| 9 | ವಿಜ್ಞಾನ, ತಜ್ಞ ಮಾರ್ಗದರ್ಶನದ ಯೋಜನೆ ಇಂಜಿನಿಯರಿಂಗ್ ಮತ್ತು ವೈದ್ಯಕೀಯದ ಶ್ರೇಷ್ಠ ಕೇಂದ್ರಗಳ ಸ್ಥಾಪನೆ (CESEM) | ವಿ.ತಂ.ದಾ.ಸ. | 300.00 |
| 10 | ವಿಜ್ಞಾನ ಶಿಕ್ಷಣದ ಸೃಜನಶೀಲ ಕೇಂದ್ರಗಳ ಸ್ಥಾಪನೆ(CISEE) | ವಿ.ತಂ.ದಾ.ಸ. | 300.00 |
| 11 | ಸೃಜನಶೀಲ ವಿಜ್ಞಾನ ಬೋಧನೆಗೆ ಅಸಾಧಾರಣ ಕೊಡುಗೆ ನೀಡಿದ ವಿಜ್ಞಾನ ಅಧ್ಯಾಪಕರಿಗೆ ಮತ್ತು ವಿಜ್ಞಾನ ಸಂವಹನಕಾರರಿಗೆ ಪ್ರಶಸ್ತಿ (ASTSC) | ವಿ.ತಂ.ದಾ.ಸ. | 3.50 |
| 12 | ಶ್ರೇಷ್ಠ ಸಂಶೋಧನಾ ಪ್ರಬಂಧಗಳಿಗೆ ಪ್ರಶಸ್ತಿ (ARP) | ವಿ.ತಂ.ದಾ.ಸ. | 2.50 |
| 13 | ಕನ್ನಡದಲ್ಲಿ ವಿಜ್ಞಾನ ಕಾರ್ಯಕ್ರಮಗಳನ್ನು ನಿರ್ಮಿಸಿ ದೂರದರ್ಶನ ವಾಹಿನಿಯಲ್ಲಿ ಪ್ರಸಾರಗೊಳಿಸುವುದು (SPTV) | ಎಂ.ಸಿ. & ಎ | 18.00 |
| 14 | ವಿಜ್ಞಾನ ಕಲಾ/ಬೋಧನಾ ಸಾಮಾಗ್ರಿಗಳ ಅಭಿವೃದ್ಧಿ (CD/DVD, ಭಿತ್ತಿಪತ್ರ, ಪುಸ್ತಕ, ಚಾರ್ಟು, ಕಿಟ್ಟಗಳು) ಮತ್ತು ಶಾಲಾ ಕಾಲೇಜುಗಳಿಗೆ ವಿತರಣೆ (SEMPD) | ವಿ.ತಂ.ದಾ.ಸ. | 10.00 |
| 15 | ದಾರ್ಶನಿಕ ಸಮೂಹದ ವೆಬ್‌ತಾಣದ ಅಭಿವೃದ್ಧಿ ಮತ್ತು ನಿರ್ವಹಣೆ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ತ್ರೈ ಮಾಸಿಕ ವಾರ್ತಾಪತ್ರದ ಪ್ರಕಟಣೆ (Web Portal) | | 2.00 |
| 16 | ವಿಜ್ಞಾನ ಮೇಳಗಳ ಆಯೋಜನೆ (SM-HS) | ಡಿ.ಎಸ್.ಇ.ಆರ್.ಟಿ. ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳು | 5.00 |

| | | | |
|---|---|---|---|
| 17 | ಪ್ರಾಂತೀಯ ರಾಜ್ಯ ವಿಜ್ಞಾನ ಮತ್ತು ತಂತ್ರಜ್ಞಾನ ಸಮ್ಮೇಳನ – 2012 (RSTC) | ಕೆ.ಎಸ್.ಸಿ.ಎಸ್.ಟಿ. | 10.00 |
| 18 | ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹದ ಕಾರ್ಯಕಾರಿ ಕಛೇರಿಯ ನಿರ್ವಹಣೆ ಮತ್ತು ಆಡಳಿತಾತ್ಮಕ ವೆಚ್ಚಗಳು | | 40.00 |
| 19 | ಇಂಜಿನಿಯರಿಂಗ್ ವಿಷಯಗಳಲ್ಲಿ ಕಾರ್ಯ ಮಾದರಿಗಳ/Prototype ತಯಾರಿಕೆಗೆ ಇಂಜಿನಿಯರಿಂಗ್ ವಿದ್ಯಾರ್ಥಿಗಳಿಗೆ ಸಹಾಯಾನುಧಾನ | ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ ಮತ್ತು ವಿ.ತಂ.ದಾ.ಸ | 20.00 |
| 20 | ಪದವಿ ಪೂರ್ವ ಶಿಕ್ಷಣ : ಬ್ರಿಡ್ಜ್ ಕೋರ್ಸ್ – ವಿಜ್ಞಾನದಡೆಗೆ ನಮ್ಮ ನಡಿಗೆ | ಪದವಿ ಪೂರ್ವ ಶಿಕ್ಷಣ ಇಲಾಖೆ | 10.00 |
| 21 | ರಾಷ್ಟ್ರೀಯ ಗಣಿತ ವರ್ಷಾಚರಣೆ – 2012 | ವಿ.ತಂ.ದಾ.ಸ | 7.00 |
| | **TOTAL** | | **1000.00** |

## ಅನುಬಂಧ – 2

| ಕ್ರ.ಸಂ. | ಕ್ರಿಯಾ ಯೋಜನೆಯ ಕಾರ್ಯಕ್ರಮಗಳು | ಕಾರ್ಯಕ್ರಮ ಅನುಷ್ಠಾನಗೊಳಿಸುವ ಇಲಾಖೆ/ಅಂಗ ಸಂಸ್ಥೆಗಳ ವಿವರ | ನಿಗದಿಪಡಿಸಿರುವ ಅಂದಾಜು ವೆಚ್ಚ ರೂ. ಲಕ್ಷಗಳಲ್ಲಿ |
|---|---|---|---|
| 1 | ಕರ್ನಾಟಕ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಮೂಲ ಸೌಕರ್ಯಾಭಿವೃದ್ಧಿಗೆ ನಿಧಿ (K-FIST) | ವಿ.ತಂ.ದಾಸ. | 500.00 |
| | **TOTAL** | | **500.00** |

**ಮದ್ಭಾವಿ ಎ.ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ,
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 1646

## ಶಿಕ್ಷಣ ಸಚಿವಾಲಯ

**ವಿಷಯ :** ಸರ್ಕಾರಿ ಪ್ರಾಥಮಿಕ ಶಾಲಾ ಸಂಗೀತ ಶಿಕ್ಷಕರಿಗೆ ಹಿರಿಯ ಸಂಗೀತ ಶಿಕ್ಷಕರೆಂದು ಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ :**
1. ಅಧ್ಯಕ್ಷರು, ಕರ್ನಾಟಕ ಸಂಗೀತ ನೃತ್ಯ ಮತ್ತು ನಾಟಕ ಶಿಕ್ಷಕರ ಸಂಘ (ರಿ), ಬೆಂಗಳೂರು ರವರ ಮನವಿ ಸಂಖ್ಯೆ : 62/2003, ದಿನಾಂಕ : 02–04–2004, 25–01–2011 ಹಾಗೂ 17–10–2011.
2. ಸರ್ಕಾರದ ಪತ್ರ ಸಂಖ್ಯೆ: ಇಡಿ 78 ಪಿಬಿಎಸ್ 2004, ದಿನಾಂಕ: 24–11–2004, 15–10–2005 ಹಾಗೂ 29–10–2009.
3. ನಿರ್ದೇಶಕರು (ಪ್ರಾಶಿ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ : ಸಿ3(5)–ಪ್ರಾಶಿ ಸಂಗೀತ 77/2012–13, ದಿನಾಂಕ : 09–03–2005 ಮತ್ತು 23–02–2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿ ಅಖಿಲ ಕರ್ನಾಟಕ ಸಂಗೀತ ಶಿಕ್ಷಕರ ಸಂಘ (ರಿ), ಬೆಂಗಳೂರು ಇವರು ಮನವಿಗಳನ್ನು ಸಲ್ಲಿಸಿ, ಸರ್ಕಾರಿ ಪ್ರಾಥಮಿಕ ಶಾಲಾ ಸಂಗೀತ ಶಿಕ್ಷಕರನ್ನು ಹಿರಿಯ ಸಂಗೀತ ಶಿಕ್ಷಕರೆಂದು ಬಡ್ತಿ ನೀಡಬೇಕೆಂದು ಕೋರಿರುತ್ತಾರೆ. ಮೇಲೆ ಓದಲಾದ (2)ರ ಸರ್ಕಾರದ ಪತ್ರಗಳಲ್ಲಿ ಪರಿಶೀಲಿಸಿ, ಸ್ಪಷ್ಟ ಅಭಿಪ್ರಾಯ ನೀಡುವಂತೆ ಇಲಾಖೆಯನ್ನು ಕೋರಲಾಗಿದೆ. ಮೇಲೆ ಓದಲಾದ (3)ರ ಪತ್ರಗಳಲ್ಲಿ ನಿರ್ದೇಶಕರು (ಪ್ರಾಥಮಿಕ ಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಅಭಿಪ್ರಾಯ ನೀಡಿರುತ್ತಾರೆ. ಪ್ರಾಥಮಿಕ ಶಾಲಾ ಸಂಗೀತ ಶಿಕ್ಷಕರ ಒಟ್ಟು ವೃಂದಬಲ 259 ಇದ್ದು, ಸದರಿ ವೃಂದಬಲದ ಶೇ. 25 ರಷ್ಟು ಹುದ್ದೆಗಳನ್ನು ಮೇಲ್ದರ್ಜೆಗೇರಿಸಿ ಪ್ರಾಥಮಿಕ ಶಾಲಾ ಹಿರಿಯ ಸಂಗೀತ ಶಿಕ್ಷಕರೆಂದು ಪದನಾಮೀಕರಿಸಿ 15 ವರ್ಷ ಸೇವಾ ಅವಧಿ ಪೂರೈಸಿರುವ ಪ್ರಾಥಮಿಕ ಶಾಲಾ ಸಂಗೀತ ಶಿಕ್ಷಕರಿಗೆ ಈ ಹುದ್ದೆಗೆ ಬಡ್ತಿ ನೀಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 90 ಪಿಬಿಎಸ್ 2011 ಬೆಂಗಳೂರು, ದಿನಾಂಕ: 12ನೇ ಜೂನ್ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಈ ಕೂಡಲೇ ಜಾರಿಗೆ ಬರುವಂತೆ ಪ್ರಾಥಮಿಕ ಶಾಲಾ ಸಂಗೀತ ಶಿಕ್ಷಕರ ಒಟ್ಟು ವೃಂದ ಬಲವು 259 ಇದ್ದು, ಸದರಿ ವೃಂದ ಬಲದ ಶೇ 10 ರಷ್ಟು ಹುದ್ದೆಗಳನ್ನು ಮೇಲ್ದರ್ಜೆಗೇರಿಸಿ ಪ್ರಾಥಮಿಕ ಶಾಲಾ ಹಿರಿಯ ಸಂಗೀತ ಶಿಕ್ಷಕರೆಂದು ಬಡ್ತಿ ನೀಡಲು ಸರ್ಕಾರ ಆದೇಶಿಸಿದೆ.

ಮೇಲಿನ ಆದೇಶದಂತೆ ಬಡ್ತಿ ಹೊಂದಿದ ಪ್ರಾಥಮಿಕ ಶಾಲಾ ಹಿರಿಯ ಸಂಗೀತ ಶಿಕ್ಷಕರಿಗೆ ಸೂಕ್ತ ವೇತನ ಶ್ರೇಣಿಯನ್ನು ನಿಗದಿಪಡಿಸಲು ಅಗತ್ಯವಾದ ಕ್ರಮವನ್ನು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಕೈಗೊಳ್ಳತಕ್ಕದ್ದು.

ಪ್ರಾಥಮಿಕ ಶಾಲಾ ಸಂಗೀತ ಶಿಕ್ಷಕರ ಒಟ್ಟು ವೃಂದ ಬಲವು 259 ಇದ್ದು, ಸದರಿ ವೃಂದ ಬಲದ ಶೇ. 10ರಷ್ಟು ಹುದ್ದೆಗಳನ್ನು ಮೇಲ್ದರ್ಜೆಗೇರಿಸಿ ಪ್ರಾಥಮಿಕ ಶಾಲಾ ಹಿರಿಯ ಸಂಗೀತ ಶಿಕ್ಷಕರೆಂದು ಬಡ್ತಿ ನೀಡಲು ಸದರಿ ಆದೇಶದಲ್ಲಿ ಅವಕಾಶ ಕಲ್ಪಿಸಿರುವ ಬಗ್ಗೆ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸೂಕ್ತ ತಿದ್ದುಪಡಿಯನ್ನು ಮಾಡಲು ಅಗತ್ಯವಾದ ಕ್ರಮವನ್ನು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ದಿನಾಂಕ : 12–04–2012 ರಂದು ಸಚಿವ ಸಂಪುಟವು ನೀಡಿದ ಅನುಮೋದನೆಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಪ್ರಭುಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1647 ಶಿಕ್ಷಣ ಇಲಾಖೆ (ಪ್ರಾಥಮಿಕ)

## ಜಲಸಂಪನ್ಮೂಲ ಸಚಿವಾಲಯ

ವಿಷಯ : ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು ಹೊಕ್ರಾಣಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರನ್ವಯ ಉಪ ವಿಭಾಗಾಧಿಕಾರಿಗಳು, ಬಿಜಾಪುರ ಇವರ ಐತೀರ್ಪಿನಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

ಓದಲಾಗಿದೆ : ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ : 03–10–11ರ ಪತ್ರ ಸಂಖ್ಯೆ : ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2011–12/5123.

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು ಹೊಕ್ರಾಣಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಹೊಕ್ರಾಣಿ ಗ್ರಾಮದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಪ್ರಕಾರ ಉಪ ವಿಭಾಗಾಧಿಕಾರಿಗಳು, ಬಿಜಾಪುರ ಇವರು ಹೊರಡಿಸಿರುವ ಐತೀರ್ಪಿನಂತೆ ಹೆಚ್ಚಿನ ಪರಿಹಾರ ಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ದಿನಾಂಕ : 03–10–11ರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಕೋರಿದ್ದಾರೆ. ಈ ಕೆರೆಯ ಭೂಸ್ವಾಧೀನ ಪ್ರಕ್ರಿಯೆಯ ವಿವರಗಳು ಕೆಳಕಂಡಂತಿದೆ:

– ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ : 13–08–1964
– ಉಪ ವಿಭಾಗಾಧಿಕಾರಿಗಳ ಐತೀರ್ಪಿನ ದಿನಾಂಕ : 16–03–1967

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಕೆಲವೊಂದು ಭೂಮಾಲೀಕರು ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಮುದ್ದೇಬಿಹಾಳ ಸಿವಿಲ್ ನ್ಯಾಯಾಲಯ(ಹಿರಿಯ ವಿಭಾಗ)ದಲ್ಲಿ ದಾಖಲಿಸಿದ್ದ ಎಲ್.ಎ.ಸಿ. ಸಂಖ್ಯೆ : 1/02ರ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ದಿನಾಂಕ : 03–04–2003 ರಂದು ನೀಡಿರುವ ಆದೇಶದಲ್ಲಿ ಪ್ರತಿ ಎಕರೆಗೆ ರೂ. 10,000/–ಗಳನ್ನು ಪರಿಹಾರ ಪಾವತಿಸುವಂತೆ ಆದೇಶಿಸಿದೆ.

ಸಿವಿಲ್ ನ್ಯಾಯಾಲಯದ ತೀರ್ಪನ್ನು ಆಧರಿಸಿ ಭೂಸ್ವಾಧೀನದಲ್ಲಿ ಸೇರಿದ್ದ ಇತರೆ ಈ ಕೆಳಕಂಡ ಸ.ನಂ.ಗಳ ಭೂಮಾಲೀಕರು ಹೆಚ್ಚಿನ ರಿಹಾರ ಕೋರಿ ಸಲ್ಲಿಸಿದಅರ್ಜಿಯ ಮೇರೆಗೆ ಉಪವಿಭಾಗಾಧಿಕಾರಿಗಳು ಇವರು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ದಿನಾಂಕ : 05–07–2011ರಂದು ಐತೀರ್ಪನ್ನು ರಚಿಸಿರುತ್ತಾರೆ.

| ಭೂಸ್ವಾಧೀಲನ ಕಾಯ್ದೆ ಕಲಂ 28(ಎ)ರಡಿ ಐತೀರ್ಪಿನ ಸಂಖ್ಯೆ ಎಲ್ ಎಕ್ಯೂ/ಸಿಆರ್–917 (28ಎ) ದಿನಾಂಕ : 05–07–2011 | | | |
|---|---|---|---|
| ಕ್ರಮ ಸಂಖ್ಯೆ | ಹೊಕ್ರಾಣಿ ಗ್ರಾಮದ ಸರ್ವೆ ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ರೂ.ಗಳಲ್ಲಿ) |
| 1 | 74 | 12–29 | 19,10,129–00 |
| 2 | 77 | 12–38 | |
| | | **ಒಟ್ಟು** | **19,10,129–00** |

ವಿಷಯವನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 145 ಭೂಸ್ವಾಪ್ರ 2011 ಬೆಂಗಳೂರು, ದಿನಾಂಕ : 04ನೇ ಜೂನ್ 2012**

ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು ಹೊಕ್ರಾಣಿ ಸಣ್ಣ ನೀರಾವರಿ ಕೆರೆನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಹೊಕ್ರಾಣಿ ಗ್ರಾಮದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ) ಪ್ರಕಾರ ಉಪ ವಿಭಾಗಾಧಿಕಾರಿಗಳು, ಬಿಜಾಪುರ ಇವರು ಹೊರಡಿಸಿರುವ ಐತೀರ್ಪಿನಂತೆ ಪರಿಹಾರ

ಧನದ ಮೊತ್ತ ರೂ. 19,10,129–00 ಗಳನ್ನು (ಹತ್ತೊಂಭತ್ತು ಲಕ್ಷದ ಹತ್ತು ಸಾವಿರದ ಒಂದುನೂರ ಇಪ್ಪತ್ತೊಂಭತ್ತು ರೂ.ಗಳು ಮಾತ್ರ) ಪ್ರಸ್ತಾವನೆಯಲ್ಲಿ ತಿಳಿಸಿರುವ ಸ.ನಂ.ಗಳಿಗೆ ಪಾವತಿಸಲು ಸರ್ಕಾರವು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಿದೆ.

1. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರ ವಹಿಸಕ್ಕದ್ದು.
2. ಹೆಚ್ಚುವರಿ ಪರಿಹಾರಧನದ ಪಾವತಿಗೆ ಮೊದಲು ಜಮೀನಿನ ಹಕ್ಕುದಾರಿಕೆ ಬಗ್ಗೆ ಖಚಿತಪಡಿಸಿಕೊಂಡು ಪಾವತಿಸತಕ್ಕದ್ದು.
3. ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಸಂಬಂಧಿಸಿದ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ವರ್ಗಾವಣೆ ಬಗ್ಗೆ ಕೂಡಲೇ ಕ್ರಮ ಕೈಗೊಳ್ಳತಕ್ಕದ್ದು.

ಈ ವೆಚ್ಚವನ್ನು 2012–13ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4702–00–800–01–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ರೂ. 19,10.129/–ಗಳನ್ನು ಹಂಚಿಕೆ ಮಾಡಿ,.ಬಿಡುಗಡೆ ಮಾಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2010, ದಿನಾಂಕ : 20–10–10 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್.1604 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಸಚಿವಾಲಯ

ವಿಷಯ : ಶ್ರೀ ಜಿ. ಚನ್ನಬಸಪ್ಪ, ಇವರ ವಿರುದ್ಧ ಇಲಾಖಾ ವಿಚಾರಣೆ ವಿಚಾರಣಾಧಿಕಾರಿಗಳ ಸಂಭಾವನೆ ಪಾವತಿ ಬಗ್ಗೆ.

ಓದಲಾಗಿದೆ :
1. ಸರ್ಕಾರದ ಆದೇಶ ಸಂಖ್ಯೆ : ಸಂವ್ಯಶಾಇ 46 ಭಾನಿವಿ 2006, ದಿನಾಂಕ : 27–12–2008.
2. ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ : 20–08–2011.
3. ಶ್ರೀ ಎಸ್. ಸುಬ್ಬರಾವ್, ವಿಚಾರಣಾಧಿಕಾರಿಗಳು, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರ ಪತ್ರ ದಿನಾಂಕ : 04–04–2012.

**ಪ್ರಸ್ತಾವನೆ :**

ಶ್ರೀ ಎನ್. ಸುಬ್ಬರಾವ್, ವಿಚಾರಣಾಧಿಕಾರಿಗಳು ಹಾಗೂ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವೆ ವರ್ಗೀಕರಣ ನಿಯಮ ಮತ್ತು ಮೇಲ್ಮನವಿ) ನಿಯಮಗಳು 1957 ರ ನಿಯಮ 11(2) ಶ್ರೀ ಜಿ. ಚನ್ನಬಸಪ್ಪ ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ ಇವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಆರೋಪಗಳಿಗೆ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರವಾದ ಸರ್ಕಾರಕ್ಕೆ ಮೇಲೆ (2) ರಲ್ಲಿ ಓದಲಾದ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ.

ಶ್ರೀ ಎನ್. ಸುಬ್ಬರಾವ್ ವಿಚಾರಣಾಧಿಕಾರಿಗಳು ಹಾಗೂ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರ ಮೆಲೆ (3) ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಆದೇಶ ಸಿ.ಆಸು.ಇ 22/ಸೇಇವಿ/2007, ದಿನಾಂಕ : 11–04–2008 ರಂತೆ ಸದರಿಯವರ ಸಂಭಾವನೆ ರೂ. 8000.00, ವಾಹನ ಭತ್ಯೆ ರೂ. 1500.00 ಒಟ್ಟು 9500.00 ಇದುವರೆವಿಗೂ ಪಾವತಿಯಾಗದಿರುವುದರಿಂದ ಪಾವತಿ ಮಾಡುವಂತೆ ಕೋರಿರುತ್ತಾರೆ. ವಿಚಾರಣಾಧಿಕಾರಿಗಳ ಸಂಭಾವನೆ ಪಾವತಿ ಮಾಡುವ ಬಗ್ಗೆ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಸಂವ್ಯಶಾಇ 46 ಭಾನಿವಿ 2006, ದಿನಾಂಕ : 05–06–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂ. : ಸಿಆಸುಇ 22 ಸೇಇವಿ 2007, ದಿನಾಂಕ : 11–04–2008 ರಂತೆ ಶ್ರೀ ಎನ್. ಸುಬ್ಬರಾವ್ ವಿಚಾರಣಾಧಿಕಾರಿಗಳು ಹಾಗೂ ನಿವೃತ್ತ ನ್ಯಾಯಾಧೀಶರು ಇವರ ಸಂಭಾವನೆ ರೂ. 8000.00 ವಾಹನ ಭತ್ಯೆ ರೂ. 1500.00 ಒಟ್ಟು ರೂ. 9500.00 ಮಂಜೂರು ಮಾಡಲಾಗಿದೆ. ಈ ಮೊತ್ತವನ್ನು ಪಾವತಿ ಮಾಡುವ ಬಗ್ಗೆ ನಿಯಮಾನುಸಾರ ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ ಇವರು ಸೂಕ್ತ ಕ್ರಮ ಕೈಗೊಳ್ಳುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1605 **ಜಿ. ಶ್ರೀಧರ್**

ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ

ಸಂಸಧೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ